# ಆರು ಆಣೆ ಬೆಲೆಯ ಪುಸ್ತಕಗಳು.



## ಏಕಾಂಕ ನಾಟಕಗಳು

೧ ವೀರ ಅಭಿಮನ್ಯು
೨ ರಾಮರಾಜ್ಯ
೩ ದಾನಶೂರ ಕರ್ಣ
೪ ಯಾರ ತಪ್ಪು
೫ ನನ್ನ ಮರ್ಜಿ
೬ ಅಳಿಯ
೭ ಮಾವನ ಆಸ್ತಿ
೮ ಸೇರಿಗೆ ಸವ್ವಾಸೇರು
೯ ಗುಟ್ಟಿನ ಪೆಟ್ಟು
೧೦ ಓಸಿ ಮಲ್ಲೀಶಿ

## ಇತರ ಪುಸ್ತಕಗಳು

೧೧ ಹಳ್ಳಿಯ ಹಾಡು
೧೨ ಲಾವಣಿಪದಗಳು
೧೩ ಸಿನೆಮಾ ಕನ್ನಡ ಹಾಡು
೧೪ ಬ್ರಹ್ಮಾನಂದ ಭಜನೆ
೧೫ ಕಬೀರ ದಾಸರ ಭಜನೆ
೧೬ ಪುರಂದರ ದಾಸರ ಭಜನೆ
೧೭ ನಗೆ ಬರಹಗಳು
೧೮ ಸ್ತ್ರೀ ನೀತಿ ಭೋಧೆ
೧೯ ವನಿತೆಯರ ಮಂಗಳ ಹಾಡು
೨೦ ದಂಪತಿ ಒಗಟುಗಳು
೨೧ ಸಾಯಿಬಾಬಾ ಚರಿತ್ರೆ
೨೨ ನೀತಿ ಕಥಾವಳಿ
೨೩ ನೆಲ್ಲೂರ ನಂಬೆಕ್ಕ
೨೪ ಕೈಚಳಕ ವಿದ್ಯಾ ರಹಸ್ಯ
೨೫ ಶಿವಲೀಲಾಮೃತ
೨೬ ಐತಿಹಾಸಿಕ ಮಹಾವ್ಯಕ್ತಿಗಳು
೨೭ ಹಿತೋಪದೇಶ
೨೮ ಮನೋರಂಜಕ ಕಥೆಗಳು
೨೯ ನಿರುದ್ಯೋಗ ನಿವಾರಣೆ
೩೦ ಆರುಭಾಷಾಶಿಕ್ಷಕ



★ ವಚನ ಸಾಹಿತ್ಯಮಾಲೆಯ ಎರಡನೆಯ ಪುಷ್ಪ ★

—ಭಕ್ತಿ ಭಾಂಡಾರಿ—

# ಶ್ರೀ ಬಸವೇಶ್ವರ ವಚನಾಮೃತಸಾರ

ಭಾವಾರ್ಥ ಸಾರಸೂಚಕ ಶಿರೋನಾಮೆಯೊಂದಿಗೆ
ವಿವರಿಸಿರುವ ೧೦೮ ವಚನರತ್ನಗಳ
ಸುಂದರ ಸಂಕಲನ





ಸಂಪಾದಕರು:
ಶ್ರೀ. ಎಸ್. ಎ. ಬತ್ತುಲಿ, ಹುಬ್ಬಳ್ಳಿ.

"ಆದ್ಯರ ವಚನ ಪರುಷ ಕಾಣಯ್ಯಾ;
ಅಧರಕ್ಕೆ ಕಹಿ, ಉದರಕ್ಕೆ ಸಿಹಿ!"
—ಶ್ರೀ ಬಸವೇಶ್ವರ



ಪ್ರಕಾಶಕರು :
ಎ. ಎಮ್. ಕೆರಡಿ. ಬುಕ್ ಸೇಲರ, ಹುಬ್ಬಳ್ಳಿ.



೧೯೫೬) ಪ್ರಥಮ ಮುದ್ರಣ (ಬೆಲೆ: ೦-೬-೦

ಶ್ರೀ ಬಸವೇಶ್ವರ

ವಚನಾಮೃತಸಾರ.

ಸಂಪಾದಕರು:

ಶ್ರೀ. ಎಸ್. ಎ. ಬತ್ತಲಿ.

ಹುಬ್ಬಳ್ಳಿ.

ಪ್ರಕಾಶಕರು:

ಶ್ರೀ ಎ. ಎಮ್. ಕೆರಡಿ.

ಹುಬ್ಬಳ್ಳಿ.

ಮುಖಚಿತ್ರ:

ಜಿ. ಕೆ. ಮೂರ್ತಿ.

ಧಾರವಾಡ.

ಮುದ್ರಕ:

ಆರ್. ಜೈ. ಬಾಕಳೆ

ಪ್ರೊ. ಶ್ರೀ ರೇಣುಕಾ ಪ್ರಿಂ. ಪ್ರೆಸ್,

ಹುಬ್ಬಳ್ಳಿ.




## —ಅರ್ಪಣೆ—



—ಪೂಜ್ಯ ತಾಯಿ—

ಚೆನ್ನಮ್ಮನ ಚರಣಕಮಲದಲ್ಲಿ

—ಶಿವಪುತ್ರ

## —ಓದುಗರಲ್ಲಿ ಅರಿಕೆ—

ಯುಗಪುರುಷರು ಅನೇಕರು ಅವತರಿಸಿ ತಮ್ಮ ಸಂದೇಶ ಸಾರಿದ್ದಾರೆ. ಬುದ್ಧ, ಬಸವ, ಬಾಪು ಬಾಳಿದ ಈ ಭಾರತದಲ್ಲಿ ಇಂದಿನ ಅಶಾಂತಿ, ಅನೀತಿ, ಅಕೃತ್ಯ, ಅಸತ್ಯ, ಹಿಂಸೆಗಳೇಕೆ?

ಯುಗಯುಗಾಂತರದಿಂದಲೂ ಜನಕೋಟಿಯ ಮುನ್ನಡೆ ಗಂಗಾಪ್ರವಾಹದಂತೆ ಸಾಗಿದೆ. ಜನಕೋಟಿ ಸ್ವರ್ಗವನ್ನು ಭೂಮಿಗಿಳಿಸಿ ತಾನೇ ದೇವರಾಗಲು ಬಯಸಿ ಮುನ್ನಡೆಯುತ್ತಿದೆ.

ಜನತೆಯನ್ನು ಮುನ್ನಡೆಸಲು ಶಕ್ತರಾಗದವರೆಲ್ಲ, ತಾವೂ ಅಳಿದು ದುರಂತ ತಂದರು. ದೇವರನ್ನು ಮರೆತು ಜನತೆಯೇ ಜನಾರ್ಧನ ಎಂದ ಯುಗಪುರುಷ ಮಾತ್ರ ಸ್ವರ್ಗವನ್ನು ಭೂಮಿಗೆ ಇಳಿಸಿ ಮಾನವರನ್ನೇ-ವೆರನ್ನಾಗಿ ಮಾಡಿದ್ದಾನೆ.

ಅನಾದಿ ಕಾಲದಿಂದಲೂ ಆಧ್ಯಾತ್ಮ ವಿದ್ಯೆಯನ್ನು ಬೋಧಿಸುತ್ತ ಬಂದ ಭಾರತ, ವಿಜ್ಞಾನ ವಿಸ್ಮಯಗಳ ಇಂದಿನ ಅಶಾಂತಿಮಯ ಪರಿಸ್ಥಿತಿಯಲ್ಲಿ ಇನ್ನೊಮ್ಮೆ ತನ್ನ ಗತಸತ್ವವನ್ನು ತೋರಲಾರದೆ?

ಇಂಥ ಸಂದಿಗ್ಧ ಸ್ಥಿತಿಯಲ್ಲಿ, ಸಹಜೀವನವನ್ನು ಸಾರಿದ ಶಿವಶರಣರ ವಚನಗಳು ಸಹಾಯಕವಾಗಿವೆ. ಅನೀತಿ, ಭ್ರಷ್ಟಾಚಾರಗಳು ಹೆಚ್ಚಿದ ಇಂದಿನ ಜಂಜಡಮಯ ಜಗತ್ತಿನಲ್ಲಿ, ವಿಶಾಲ ಮನೋಭಾವನೆಯ ತತ್ವ ತಳಹದಿಯ ಮೇಲೆ ಆಧಾರಿತವಾದ ಶ್ರೀ ಬಸವೇಶ್ವರನ ಕೆಲ ಸಂಕಲಿತ ವಚನಾಮೃತ ಸಿಂಚನದಿಂದ ಪ್ರಚಲಿತ ಜನಜೀವನದಲ್ಲಿ ಶಾಂತಿ ಲಭಿಸಲಿ!

—ಸಂಪಾದಕರು

॥ ಶ್ರೀಗುರು ಬಸವಲಿಂಗಾಯ ನಮಃ ॥





# ಶ್ರೀ ಬಸವೇಶ್ವರ ವಚನಾಮೃತಸಾರ

## ★ ಶ್ರೀ ಬಸವೇಶ್ವರ ವಚನ ಹಿರಿಮೆ ★

**—ಆದ್ಯರ ವಚನ ಅಧರಕ್ಕೆ ಕಹಿ, ಉದರಕ್ಕೆ ಸಿಹಿ—**

೧. ಆದ್ಯರ ವಚನ ಪರುಷ ಕಂಡಯ್ಯಾ, ಸದಾಶಿವನೆಂಬ ಲಿಂಗವ ನೆರೆ ನಂಬುವದು, ನಂಬಲೊಡನೆ ನೀ ವಿಜಯಿ ಕಂಡಯ್ಯಾ. ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ.

**—ವಚನ ಪುರಾಣಕ್ಕೆ ಸಮಾನ ಅನ್ಯ ಪುರಾಣಗಳಿಲ್ಲ—**

೨. ಆದಿಪುರಾಣ ಅಸುರರಿಗೆ ಮಾರಿ, ವೇದಪುರಾಣ ಹೋತಿಂಗೆ ಮಾರಿ, ರಾಮಪುರಾಣ ರಕ್ಕಸರಿಗೆ ಮಾರಿ, ಭಾರತ ಪುರಾಣ ಗೋತ್ರಕ್ಕೆ ಮಾರಿ, ಇವೆಲ್ಲ ಪುರಾಣ ಕರ್ಮಕ್ಕೆ ಮೊದಲು, ನಿಮ್ಮ ಪುರಾಣಕ್ಕೆ ಪ್ರತಿ ಇಲ್ಲ ಕೂಡಲ ಸಂಗಮದೇವಾ.

**—ವಚನ ಪುರಾಣವ ಬಿಟ್ಟು ಬೇರೆ ಪುರಾಣಗಳ ಕೇಳಿ ಕೆಡದಿರು—**

೩. ಹಾಲ ತೊರೆಗೆ ಬೆಲ್ಲವಂತಹ ಕೆಸರು, ಸಕ್ಕರೆಯಂತಹ ಮಳಲು, ತವರಾಜದಂತಹ ನೊರೆತೊರೆಗಳು. ಇಂತಪ್ಪ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪನೀರ ಸವಿದಂತಾಯಿತ್ತಯ್ಯಾ ಎನ್ನ ಯುಕ್ತಿ. ನಿಮ್ಮ ವಚನಂಗಳ ಕೇಳದೆ ಅನ್ಯ ಪುರಾಣಗಳ ಕೇಳಿ ಕೆಟ್ಟೆನಯ್ಯಾ ಕೂಡಲಸಂಗಮ ದೇವಾ.

# ★ ಪರಶಿವನ ಅಗಾಧ ನಿಲವು ★

### —ಶಿವನು ಸಹಜಭಾವ ಸ್ಥಿರರೂಪನು—

೪. ಅರಗು ತಿಂದು ಕರಗುವ ದೈವವ, ಉರಿಯ ಕಂಡರೆ ಮುರುಟುವ ದೈವವ ಎಂತು ಸರಿ ಎಂಬೆನಯ್ಯಾ? ಅವಸರ ಬಂದರೆ ಮಾರುವ ದೈವವ ಎಂತು ಸರಿ ಎಂಬೆನಯ್ಯಾ? ಅಂಜಿಕೆ ಬಂದರೆ ಹೂಳುವ ದೈವವ ಎಂತು ಸರಿ ಎಂಬೆನಯ್ಯಾ? ಸಹಜಭಾವ, ನಿಜೈಕ್ಯ, ಸ್ಥಿರರೂಪ, ನಿರ್ವಿಕಾರ, ನಿರಂಜನ ಕೂಡಲಸಂಗಮ ದೇವನೊರ್ವನೇ ದೇವಕಾಣಿರೋ.

### —ತ್ರಿಜಗಭರಿತ ಸೃಷ್ಟಿಕರ್ತನ ವಿಚಿತ್ರ ನಿಲವು—

೫. ಜಗವಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ! ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ! ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ, ಕೂಡಲ ಸಂಗಮದೇವಯ್ಯಾ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ!!

### —ಸರ್ವಾಂಗ ಸುಂದರ ಶಿವನ ವಿರಾಟ ರೂಪ ದರ್ಶನ—

೬- ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ, ಕೂಡಲ ಸಂಗಮದೇವಾ.

### —ಶಿವನು ಕಲ್ಪನಾತೀತ ರಹಸ್ಯಮಯನು—

೭. ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತು, ಶಶಿಯೊಳಗಣ ರಸದ ರುಚಿಯಂತಿದ್ದಿತು, ನನೆಯೊಳಗಣ ಪರಿಮಳದಂತಿದ್ದಿತು, ಕೂಡಲ ಸಂಗಮದೇವಾ, ಕನ್ಯೆಯ ಸ್ನೇಹದಂತಿದ್ದಿತು.

### —ಇಬ್ಬರು ಮೂವರು ದೇವರಿಲ್ಲ—

೮. ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ; ದೇವನೊಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿ ನೋಡಾ! ಕೂಡಲ ಸಂಗಮ ದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲವೆಂದಿತ್ತು ದಾ ವೇದವು.

## —ನಂಬಬಲ್ಲ ಭಕ್ತನಿಗೆ ದೇವನೊಬ್ಬ—

೯. ನಂಬಿವ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ, ನಂಬಬಲ್ಲ ಭಕ್ತಂಗೆ ದೇವನೊಬ್ಬನೇ ಕಾಣಿರೋ. ಬೇಡ ಬೇಡ! ಅನ್ಯ ದೈವದ ಸಂಗ ಹೊಲ್ಲ. ಬೇಡ ಬೇಡ! ಅನ್ಯ ದೈವವೆಂಬುದು ಹಾದರ ಕಾಣಿರೋ! ಕೂಡಲ ಸಂಗಮದೇವರು ಕಂಡರೆ ಮೂಗ ಕೊಯ್ಯುವ ಕಾಣಿರೋ!

## — ದೇವನೊಬ್ಬ ನಾಮ ಹಲವು—

೧೦. ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ! ಮತ್ತೊಂದಕ್ಕೆರಗಿದಡೆ ಕಿವಿಮೂಗ ಕೊಯ್ಯುವನು! ಹಲವು ದೇವರ ಎಂಜಲ ತಿಂಬವರನೇನೆಂಬೆನಯ್ಯಾ, ಕೂಡಲ ಸಂಗಮದೇವಾ?

## —ಪರಮ ಕಾರಣಿಕ ಪರಮಾತ್ಮನೇ ವಿಶ್ವದ ಮೂಲಾಧಾರ—

೧೧. ಋಣ ತಪ್ಪಿದ ಹೆಂಡತಿಯಲ್ಲಿ, ಗುಣ ತಪ್ಪಿದ ನೆಂಟನಲ್ಲಿ, ಜೀವವಿಲ್ಲದ ದೇಹವಲ್ಲಿ ಫಲವೇನೋ? ಆಳ್ದನೊಲ್ಲದಾಳಿನಲ್ಲಿ, ಸಿರಿಯು ತೊಲಗಿದರಸಿನಲ್ಲಿ, ವರವಿಲ್ಲದ ದೈವದಲ್ಲಿ ಫಲವೇನೋ? ಕಳಿತ ಹೂವಿನಲ್ಲಿ ಕಂಪ! ಕುಪ್ಪಸವನು ಳಿದ ಸೂಳೆಯಲ್ಲಿ ಪೆಂಪ! ಕೊಳಚಿ ನೀರಿನಲ್ಲಿ ಗುಂಪನರಸುವಿರಿ ಮರುಳೇ? ವರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ ಪರಮ ಕಾರಣಿಕ ನಮ್ಮ ಕೂಡಲ ಸಂಗಮದೇವ.

# ★ ಸಂಸಾರ ಕೇವಲ ಮಾಯೆ ★

## —ಮಾಯೆಯ ಮೋಹಕ ಸ್ವರೂಪ—

೧೨. ಜನಿತಕ್ಕೆ ತಾಯಾಗಿ ಹುಟ್ಟಿದಳು ಮಾಯೆ, ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ, ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ, ಇದಾವಾವ ಪರಿಯಲ್ಲಿ ಕಾಡಿತ್ತು ಮಾಯೆ! ಈ ಮಾಯೆಯ ಕಳೆವೊಡೆ ಎನ್ನಳವಲ್ಲ, ನೀವೇ ಬಲ್ಲಿರಿ ಕೂಡಲ ಸಂಗಮದೇವಾ.

## —ಸಂಸಾರ ರಾಹು ನುಂಗಿದ ಜೀವಗ್ರಹಣ—

೧೩. ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ, ಸಂಸಾರವೆಂಬ ರಾಹು ಸರ್ವ ಗ್ರಾಸಿಯಾಗಿ ನುಂಗಿತ್ತಯ್ಯಾ, ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು. ಇನ್ನೆಂದಿಗೆ ಮೋಕ್ಷವಹುದೋ ಕೂಡಲ ಸಂಗಮದೇವಾ.

### —ಹಾವ ಹಾವಾಡಿಗನ ಸ್ನೇಹದಂತಿರುವ ಸಂಸಾರ—

೧೪. ಶೂಲದ ಮೇಲಣ ವಿಭೋಗವೇನಾದರೇನೋ ನಾನಾವರ್ಣದ ಸಂಸಾರ ಹಾವ ಹಾವಾಡಿಗನ ಸ್ನೇಹದಂತೆ, ತನ್ನಾತ್ಮ ತನಗೆ ಹಗೆಯಾದ ಬಳಿಕ ಬಿನ್ನಾಣವುಂಟೇ ? ಮಹಾದಾನಿ ಕೂಡಲಸಂಗಮದೇವಾ.

### —ಹೊನ್ನು, ಹೆಣ್ಣು, ಮಣ್ಣುಗಳಿಗೆ ಮರುಳಾಗಿ ವ್ಯರ್ಥ ಕೆಡಬೇಡ—

೧೫. ಊರಸೀರೆಗೆ ಅಗಸ ಬಡಿವಡೆದಂತೆ ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ಮರುಳಾದೆ. ನಿಮ್ಮನರಿಯದ ಕಾರಣ, ಕೆಮ್ಮನೆ ಕೆಟ್ಟೆ ಕೂಡಲ ಸಂಗಮದೇವಾ.

### —ವಿಷಯ ವಾಸನೆ ತುಂಬಿದ ಮನದಲ್ಲಿ ಮನೆಯೊಡೆಯನಿಲ್ಲ—

೧೬. ಮನೆಯೊಳಗೆ ಮನೆಯೊಡೆಯನಿದ್ದಾನೆಯೋ ಇಲ್ಲವೋ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೆಯೋ ಇಲ್ಲವೋ? ತನುವಿನಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮದೇವಾ.

### ಮುಗ್ಧ ಮನೋಭಾವ ತಂದೊಡ್ಡಿ ಕೊಲ್ಲುವ
### —ಮಾಯೆಯ ಮೋಹಕ ಲೀಲಾಜಾಲ—

೧೭. ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು, ಕೊಂದಿಹರೆಂಬುದನರಿಯದೆ ಬೆಂದೊಡಲ ಹೊರೆಯ ಹೋಯಿತ್ತಲ್ಲದೆ! ಅದಂದೇ ಹುಟ್ಟಿತ್ತು, ಅದಂದೇ ಹೊಂದಿತ್ತು: ಕೊಂದವರುಳಿದರೆ, ಕೂಡಲ ಸಂಗಮದೇವಾ?

### ಅಸ್ಥಿರ ಸಂಸಾರವ ನಂಬಿ
### —ಅಸತ್ಯ ನುಡಿವವರನ್ನು ಶಿವನು ಮೆಚ್ಚನು—

೧೮. ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆ ಮಾಡುವಂತೆ ಶೂಲವನೇರುವ ಕಳ್ಳನು ಹಾಲು ತುಪ್ಪ ಕುಡಿದು ಮೇಲೇಸು ಕಾಲ ಬದುಕುವನೋ ? ಕೆಡೆ ಒಡಲ ನೆಚ್ಚಿ ಕಡು ಹುಸಿಯನೆ ಹುಸಿದು ಒಡಲ ಹೊರೆವವರ ಕೂಡಲ ಸಂಗಮದೇವನೊಲ್ಲ ಕಾಣಿರಣ್ಣಾ.

## ಶಿವನನ್ನು ನೆನೆಯಗೊಡದೇ
### —ಸಂಸಾರ ಸಾಗರದಲ್ಲಿ ಮುಳುಗಿಸಿ ಕೊಲ್ಲುವ ಮಾಯೆ—

೧೯. ಇಂದಿಗೆಂತು ನಾಳಿಗೆಂತು ಎಂದು ಬೆಂದೊಡಲ ಹೊರೆಯ ಹೋಯಿತ್ತೆನ್ನ ಸಂಸಾರ! ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ; ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ! ಎಂದೆಂದೂ ಸದಾಶಿವನ ಕುಂದದೆ ನೆನೆಯಲೀಯದೆ ಕೊಂದುದಯ್ಯಾ ಈ ಮಾಯೆ, ಕೂಡಲ ಸಂಗಮ ದೇವಾ.

## ★ ಶಿವನಲ್ಲಿ ಆರ್ತಭಕ್ತನ ಆತ್ಮನಿವೇದನೆ ★
### ಸಂಸಾರ ಸಾಗರದಲ್ಲಿ ಮುಳುಗಿಸಿ ಮರೆಸುವ ಶಿವನನ್ನೇ ಮೊರೆಹೋಗು

೨೦. ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ ಧರೆ ಹತ್ತಿ ಉರಿದರೆ ನಿಲಬಹುದೇ? ಏರಿ ನೀರುಂಬಡೆ, ಬೇಲಿ ಕೆಯ್ಯ ಮೇವಡೆ. ನಾರಿ ತನ್ನ ಮನೆಯಲ್ಲಿ ಕಳುವಡೆ, ತಾಯಿ ಮೊಲೆಹಾಲು ನಂಜಾಗಿ ಕೊಲುವಡೆ ಇನ್ನಾರಿಗೆ ದೂರುವೆ ಕೂಡಲ ಸಂಗಮದೇವಾ ?

### ಪಾಪಕೂಪದಲ್ಲಿ ಹೊರಳಾಡಿ ಮೃತ್ಯುಮುಖ ಸೇರುವ ಮೊದಲೇ
### —ಶಿವನನ್ನು ಆರಾಧಿಸು—

೨೧. ಉತ್ಪತ್ತಿ ಶುಕ್ಲ ಶೋಣಿತದಿಂದಾದ ಲಜ್ಜೆ ಸಾಲದೇ? ಮತ್ತೆ ದುರಿತಂಗಳ ಹೊರುವ ಎಗ್ಗತನವೇಕಯ್ಯಾ? ಮೃತ್ಯುವಿನ ಬಾಯಿಗೆ ಒಳಗಾಗಲೇಕೆ? ಒತ್ತೊತ್ತುವ ಜನನವ ಗೆಲುವರೇ? ಕರ್ತನ ಪೂಜಿಸುವ ನಮ್ಮ ಕೂಡಲ ಸಂಗಮದೇವನ.

### —ಪ್ರಪಂಚ ಪರಿಚಿತ ಶಿವನು ಭಕ್ತನಿಗೆ ಚಿರಪರಿಚಿತ—

೨೨. ಜಗವ ಸುತ್ತಿಪುದು ನಿನ್ನ ಮಾಯೆಯಯ್ಯಾ, ನಿನ್ನ ಸುತ್ತಿಪುದು ಎನ್ನ ಮನ ನೋಡಯ್ಯಾ; ಜಗಕ್ಕೆ ಬಲ್ಲಿದ ನೀನು, ಆನು ನಿನಗೆ ಬಲ್ಲಿದನು ಕಂಡಯ್ಯಾ. ಕರಿಯು ಕನ್ನಡಿಯೊಳಗಡಗಿದಂತಯ್ಯಾ, ಎನ್ನೊಳಗೆ ನೀನಡಗಿದೆ ಕೂಡಲ ಸಂಗಮದೇವಾ.

**—ಸಂಸಾರ ಸರ್ಪಕ್ಕೆ ಶಿವನ ಪೂಜಿಸುವದೇ ಗರುಡ ಮಂತ್ರ—**

೨೩. ಮನವೇ ಸರ್ಪ, ತನುವೇ ಹೇಳಿಗೆ, ಹಾವಿನೊಡತಣ ಹುದುವಾಳಿಗೆ! ಇನ್ನಾವಾಗ ಕೊಂದಿಹುದೆಂದರಿಯೆ: ಇನ್ನಾವಾಗ ತಿಂದಿಹುದೆಂದರಿಯೆ! ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ ಅವೇ ಗಾರುಡ, ಕೂಡಲ ಸಂಗಮದೇವಾ!

**—ಕರಣೇಂದ್ರಿಯಗಳು ಕಾಡುವ ಮೊದಲೇ ಶಿವನನ್ನು ಸೇರು—**

೨೪. ಒಂದು ಮೊಲಕ್ಕೆ ನಾಯನೊಂಭತ್ತು ಬಿಟ್ಟಂತೆ, ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ, ಎನ್ನ ಬಿಡು ತನ್ನ ಬಿಡೆಂಬುದು ಮನವಿಕಾರ, ಕರಣೇಂದ್ರಿಯಗಳೆಂಬ ಸೊಣಗ ಮುಟ್ಟದ ಮುನ್ನ ಮನ ನಿಮ್ಮನೈದುಗೆ ಕೂಡಲ ಸಂಗಮದೇವಾ.

**—ಶಿವನೊಲಿದ ಬಳಿಕ ಭವಬಂಧನದ ಬಿಡುಗಡೆ—**

೨೫. ಉರಿಯೊಳಗಿನ ಕರ್ಪುರಕ್ಕೆ ಕರಿಯುಂಟೇ ಅಯ್ಯಾ? ಬಯಲ ಮರೀಚಿಯ ಜಲಕ್ಕೆ ಕೆಸರುಂಟೇ ಅಯ್ಯಾ? ವಾಯುವಿನಪ್ಪಿದ ಪರಿಮಳಕ್ಕೆ ನಿರ್ಮಾಲ್ಯವುಂಟೇ ಅಯ್ಯಾ? ನೀವು ನೆರೆ ಒಲಿದ ಬಳಿಕ ಎನಗೆ ಭವ ಉಂಟೇ? ಕೂಡಲ ಸಂಗಮದೇವ, ನಿಮ್ಮ ಚರಣಕಮಲದೊಳಗೆ ಎನ್ನನಿಂಬಿಟ್ಟುಕೊಳ್ಳಯ್ಯಾ.

**—ಸರ್ಪಕಾವಲಿನಲ್ಲಿರುವ ಕಪ್ಪೆಯಂತೆ ನರನ ಬಾಳುವೆ—**

೨೬. ಕಪ್ಪೆ ಸರ್ಪನ ನೆಳಲಲ್ಲಿ ಇಪ್ಪಂತೆ ಎನಗಾಯಿತಯ್ಯಾ, ಅಕಟಕಟ! ಸಂಸಾರ ವೃಥಾ ಹೋಯಿತಲ್ಲಾ! ಕರ್ತೃ ಕೂಡಲ ಸಂಗಮದೇವಾ, ಇದ ತಪ್ಪಿಸಿ ಎನ್ನ ರಕ್ಷಿಸಯ್ಯಾ ಪ್ರಭುವೇ.

**—ನರನ ಬಾಳು ಅತಿ ಕೀಳು—**

೨೭. ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬೆಲೆಗೈವರಯ್ಯಾ, ನೆಲನಾಳ್ವನ ಹೆಣನೆಂದರೆ ಒಂದಡಿಕೆಗೆ ಕೊಂಬವರಿಲ್ಲ ನೋಡಯ್ಯಾ. ಮೊಲನಿಂದ ಕರಕಷ್ಟ ನರನ ಬಾಳುವೆ, ಸಲೆ ನಂಬು ನಮ್ಮ ಕೂಡಲ ಸಂಗಮದೇವನ.

**ಹರನಿಗಲ್ಲದೆ ನರನಿಗೆ ಮುಕ್ತಿಯ ಬೇಡಿ ವ್ಯರ್ಥ ಧೈರ್ಯಗೆಡಬೇಡ**

೨೮. ಸುರರ ಬೇಡಿದರಿಲ್ಲ, ನರರ ಬೇಡಿದರಿಲ್ಲ, ಬರಿದೆ ಧೃತಿಗೆಡಬೇಡ ಮನವೇ. ಆರನಾದರೆಯೂ ಬೇಡಿ ಬೇಡಿ ಬರಿದೆ ಧೃತಿಗೆಡಬೇಡ ಮನವೇ. ಕೂಡಲ ಸಂಗಮದೇವನಲ್ಲದೆ ಆರ ಬೇಡಿದರಿಲ್ಲ ಮನವೆ,

## ವಿಷಯ ಸುಖದ ಸವಿಯ ಮರೆಸಿ
## —ಸ್ವರ್ಗಸುಖದ ಸುಧಾರಸವನುಣಿಸಿ ಸಂರಕ್ಷಿಸು—

೨೯. ವಿಷಯವೆಂಬ ಹಸುರನೆನ್ನ ಮುಂದೆ ಪಸರಿಸಿದೆಯಯ್ಯಾ, ಪಶುವೇನ ಬಲ್ಲುದು ಹಸುರೆಂದೆಳಸುವದಲ್ಲದೆ? ವಿಷಯರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ, ಸುಬುದ್ಧಿಯೆಂಬ ಉದಕವನೆರೆದು ನೋಡಿ ಸಲುಹಯ್ಯಾ ಕೂಡಲ ಸಂಗಮದೇವಾ.

## —ಸಾಯುವ ಮೊದಲೇ ಶಿವನನ್ನು ಪೂಜಿಸು—

೩೦. ನೆರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ, ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ, ಕಾಲಮೇಲೆ ಕೈಯ ನೂರಿ ಕೋಲು ಪಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲಸಂಗಮದೇವನ.

## —ಸಂಸಾರ ಸುಖದ ಸೊಣಗನಾಗಬೇಡ—

೩೧. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ ಸಂಸಾರ ಸಂಗವ ಬಿಡದು ನೋಡೆನ್ನ ಮನವು, ಈ ನಾಯಿತನವ ಮಾಣಿಸು ಕೂಡಲ ಸಂಗಮದೇವ ನಿಮ್ಮ ಧರ್ಮ.

## —ಅಸ್ಥಿರ ಐಶ್ವರ್ಯವ ಮರೆತು ದೇವಪೂಜೆಯ ಮಾಡು—

೩೨. ಸಂಸಾರವೆಂಬುದು ಗಾಳಿಯ ಸೊಡರು, ಸಿರಿ ಎಂಬುದೊಂದು ಸಂತೆಯ ಮಂದಿ ಕಂಡಯ್ಯಾ, ಇದನು ನೆಚ್ಚಿ ಕೆಡಬೇಡ. ಸಿರಿ ಎಂಬುದ ಮರೆದು ಪೂಜಿಸು ನಮ್ಮ ಕೂಡಲ ಸಂಗಮದೇವನ.

## —ಶಿವನೊಲಿದರೆ ಸಕಲ ಸುಖ ಸಿದ್ಧಿ—

೩೩. ನೀನೊಲಿದರೆ ಕೊರಡು ಕೊನರುವದಯ್ಯಾ, ನೀನೊಲಿದರೆ ಬರಡು ಹಯನವಹುದಯ್ಯಾ, ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ, ನೀನೊಲಿದರೆ ಸಕಲ ಪಡಿ ಪದಾರ್ಥ ಇದರಲ್ಲಿಪ್ಪವು.

## ಪಂಚೇಂದ್ರಿಯ ವಿಕಾರಗಳಿಗೆ ಪರಿತಪಿಸದೆ
## —ಶಿವನಿಗೆ ಶರಣು ಹೋಗು—

೩೪. ವಿಕಳನಾದೆನು ಪಂಚೇಂದ್ರಿಯ ಧಾತುವಿನಿಂದ, ಮತಿಗೆಟ್ಟೆನು ಮನದ

ವಿಕಾರದಿಂದ, ಪ್ರತಿಗೆಟ್ಟೆನು ಧನದ ವಿಕಾರದಿಂದ, ಗತಿಗೆಟ್ಟೆನು ಕಾಯ ವಿಕಾರದಿಂದ, ಶರಣುಹೊಕ್ಕೆನು ಕೂಡಲ ಸಂಗಮದೇವಯ್ಯ.

**ಸುಗುಣ ಸಜ್ಜನ ಶಿವನೇ, ನನ್ನ ಅವಗುಣಗಳನ್ನು ಗಣನೆಗೆ ತರದಿರು**

೩೫. ಮೇರು ಗುಣವನರಸುವದೇ ಕಾಗೆಯಲ್ಲಿ? ಪರುಷ ಗುಣವನರಸುವದೇ ಕಬ್ಬುನದಲ್ಲಿ? ಸಾಧುಗುಣವನರಸುವದೇ ಅವಗುಣಿಯಲ್ಲಿ? ಚಂದನ ಗುಣವ ನರಸುವದೇ ತರುಗಳಲ್ಲಿ ? ಸರ್ವಗುಣ ಸಂಪನ್ನ ಲಿಂಗವೇ, ನೀನೆನ್ನಲ್ಲಿ ಅವಗುಣವನರಸುವದೇ ಕೂಡಲ ಸಂಗಮದೇವ ?

**—ತನು ಮನ ಧನ ಸಮರ್ಪಿಸದವರಿಗೆ ಶಿವ ಒಲಿಯಲಾರನು—**

೩೬. ಹಲವು ಮಣಿಯ ಕಟ್ಟಿ ಕುಣಿಕುಣಿದಾಡಿ, ಹಲವು ಪರಿಯಲಿ ವಿಭೂತಿಯ ಧರಿಸಿ, ಗಣಾಡಂಬರದ ನಡುವೆ ನಲಿನಲಿದಾಡಿ, ಉಂಡು ತಂಬುಲಗೊಂಡು ಹೋಹುದಲ್ಲ. ತನು ಮನ ಧನವ ಸಮರ್ಪಿಸದವರ ಕೂಡಲ ಸಂಗಮದೇವನೆಂತೊಲಿವ.

**—ವಿಧಿಲಿಖಿತವನ್ನು ಮೀರುವದು ಹರಿಬ್ರಹ್ಮಾದಿಗಳಿಗೂ ಅಸಾಧ್ಯ—**

೩೭. ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದು ಬಪ್ಪುದು ನಮಗೀಗಲೇ ಬರಲಿ, ಇದಕಾರಂಜುವರು ಇದಕಾರಳಕುವರು! "ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ ನಮ್ಮ ಕೂಡಲ ಸಂಗಮದೇವ ಬರೆದ ಬರೆಹವ ತಪ್ಪಿಸುವರೆ ಹರಿಬ್ರಹ್ಮಾದಿಗಳವಲ್ಲ.

# ಸರ್ವಾರ್ಪಣ ಯೋಗ; ಲಿಂಗಾಂಗ ಸಮರಸ ಭಾವ

**ತನು ಮನ ಧನಗಳನ್ನು ಶಿವನಿಗೆ ಅರ್ಪಿಸಿದ ಬಳಿಕ ಬೇರೆ ವಿಚಾರ ಬೇಡ**

೩೮. ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ, ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ, ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ, ಇಂತೀ ತ್ರಿವಿಧವು ನಿಮ್ಮದೆಂದರಿದ ಬಳಿಕ ಎನಗೆ ಬೇರೆ ವಿಚಾರವುಂಟೇ ಕೂಡಲ ಸಂಗಮದೇವಾ ?

**—ಭಕ್ತನ ಸಹಜ ಸಂಗೀತ ಸಾಧನ—**

೩೯. ಎನ್ನ ಕಾಯವ ದಂಡಿಗೆಯ ಮಾಡಯ್ಯಾ, ಎನ್ನ ಶಿರವ ಸೋರೆಯ

ಮಾಡಯ್ಯಾ, ಎನ್ನ ನರವ ತಂತಿಯ ಮಾಡಯ್ಯಾ, ಎನ್ನ ಬೆರಳ ಕಡ್ಡಿಯ ಮಾಡಯ್ಯಾ, ಮೂವತ್ತೆರಡು ರಾಗವ ಹಾಡಯ್ಯಾ, ಎನ್ನ ಉರದಲೊತ್ತಿ ನಿನ್ನ ಜಯಗಾನವಂ ಬಾರಿಸು ಕೂಡಲ ಸಂಗಮದೇವಾ.

**—ದೇಹವೇ ದೇಗುಲ, ಶಿರವೇ ಹೊನ್ನ ಕಳಸ—**

**೪೦.** ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡುವೆ ಬಡವನಯ್ಯಾ? ಎನ್ನ ಕಾಲೇ ಕಂಬ! ದೇಹವೇ ದೇಗುಲ' ಶಿರವೇ ಹೊನ್ನ ಕಳಸವಯ್ಯಾ! ಕೂಡಲ ಸಂಗಮದೇವ ಕೇಳಯ್ಯಾ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

**—ಲಿಂಗಾಂಗ ಸಮರಸ ಹೊಂದಿದ ಭಕ್ತನ ಅಂತಃಸ್ಥಿತಿ—**

**೪೧.** ದೆಸೆ ದಿಕ್ಕು ಧರೆ ಗಗನವೆಂಬುದ ನಾನರಿಯೆನಯ್ಯಾ, "ಲಿಂಗಮಧ್ಯೇ ಜಗತ್ಸರ್ವಂ" ಎಂಬುದ ನಾನರಿಯೆನಯ್ಯಾ. ಲಿಂಗ ಸೋಂಕಿದ ಸುಖದೊಳಗೆ ಶಿವ ಶಿವ ಎನುತಿರ್ದೆನಯ್ಯಾ. ಅಂಬುಧಿಯೊಳಗೆ ಬಿದ್ದ ವಾರಿಕಲ್ಲಿನಂತೆ ಭಿನ್ನಭಾವವಿಲ್ಲದೆ ಶಿವ ಶಿವ ಎನುತಿರ್ದೆನು ಕಾಣಾ ಕೂಡಲ ಸಂಗಮದೇವಾ.

**—ಲಿಂಗ ಪತಿ ಶರಣ ಸತಿ—**

**೪೨.** ನಿಮ್ಮ ನೋಟ ಅನಂತಸುಖ, ನಿಮ್ಮ ಕೂಟ ಪರಮ ಸುಖವು. ಅಷ್ಟಕೋಟಿ ರೋಮಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನು. ಕೂಡಲಸಂಗಮದೇವಯ್ಯ! ನಿಮ್ಮ ನೋಡಿ ನೋಡಿ ಎನ್ನ ಮನದಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಂಗಳು.

**—ದೇವಾ, ನಿನ್ನ ಚರಣಕಮಲದೊಳಗಿನ ಭ್ರಮರವಾಗಿರಿಸು—**

**೪೩.** ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹೆ ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿಯ ತುಂಬಿ, ಕೂಡಲ ಸಂಗಮದೇವಾ, ನಿಮ್ಮ ಚರಣ ಕಮಲದೊಳು ನೊಗವ ಬಂಡುಂಬ ತುಂಬಿಯಾಗಿರ್ದೆನು.

## ★ ಶರಣರ ಸಂಗ ಭವ ಭಂಗ ★

**— ಶರಣನ ಸಹಜ ಶಿವಚಿಂತನೆ —**

**೪೪.** ವನದ ಕೋಗಿಲೆ ಮನೆಗೆ ಬಂದರೆ ತನ್ನ ವನವ ನೆನೆವುದ ಮಾಣ್ಬುದೇ? ಮಲೆಯ ಗಜವು ಮನೆಗೆ ಬಂದರೆ ತನ್ನ ಮಲೆಯ ನೆನೆವುದ

ಮಾಣ್ಬುದೇ ? ಕೂಡಲ ಸಂಗನ ಶರಣರು ಮರ್ತ್ಯಕ್ಕೆ ಬಂದರೆ ತಮ್ಮ ಆದಿ ಮಧ್ಯಾಂತರಂಗವ ನೆನೆವುದ ಮಾಣ್ಬರೇ ?

—ಶರಣರನ್ನು ಕಾಣುವದು ಪುಣ್ಯದ ಫಲ—

೪೫. ಕಾಣಬಹುದೆ ಪರುಷದ ಗಿರಿ ಅಂಧಕಂಗೆ ? ಅರಿಯಬಹುದೆ ರಸದ ಬಾವಿ ನಿರ್ಭಾಗ್ಯಂಗೆ ? ತೆಗೆಯಬಹುದೆ ಕಡವರವು ದರಿದ್ರಂಗೆ ? ಕರೆಯಬಹುದೆ ಕಾಮಧೇನು ಅಶುದ್ಧಂಗೆ ? ಹೊನ್ನ ಹುಳುವ ಕಂಡು ನರಿ ತನ್ನ ಬಾಲವ ಹುಣ್ಣ ಮಾಡಿಕೊಂಡರೆ ಹೋಲಬಹುದೆ? ಎನ್ನೊಡೆಯ ಕೂಡಲ ಸಂಗನ ಶರಣರನು, ಪುಣ್ಯವಿಲ್ಲದೆ ಕಾಣಬಹುದೇ?

—ಶರಣರ ದಿವ್ಯಾಗಮನ ನಿರೀಕ್ಷಿಸುವ ಭಕ್ತನ ಭಾವಸ್ಥಿತಿ—

೪೬. ಹೊಲಬುಗೆಟ್ಟ ಶಿಶು ತನ್ನ ತಾಯನರಸುವಂತೆ, ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ, ಬಯಸುತಿರ್ದೆನಯ್ಯಾ ನಿಮ್ಮ ಶರಣರ ಬರವನು. ದಿನಕರನ ಉದಯಕ್ಕೆ ಕಮಲ ವಿಕಸಿತವಾದಂತೆ, ಎನಗೆ ನಿಮ್ಮ ಶರಣರ ಬರವು ಕೂಡಲಸಂಗಮದೇವಾ.

—ಶರಣರ ಬರುವಿಕೆಯೇ ಭಕ್ತನ ಪ್ರಾಣ ಜೀವಾಳ—

೪೭. ಸೂರ್ಯನ ಉದಯ ತಾವರೆಗೆ ಜೀವಾಳ, ಚಂದ್ರಮನ ಉದಯ ನೈದಿಲೆಗೆ ಜೀವಾಳ, ಕೂಪರ ತಾವಿನಲ್ಲಿ ಕೂಟ ಜೀವಾಳ, ಒಲಿದ ತಾವಿನಲ್ಲಿ ನೋಟ ಜೀವಾಳವಯ್ಯಾ: ಕೂಡಲ ಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯಾ.

—ಅರಿತರೆ ಶರಣ ಮರೆತರೆ ಮಾನವ—

೪೮. ಉಂಬ ಬಟ್ಟಲು ಬೇರೆ ಕಂಚಲ್ಲ: ನೋಡುವ ದರ್ಪಣ ಬೇರೆ ಕಂಚಲ್ಲ; ಭಾಂಡ ಒಂದೆ, ಭಾಜನ ಒಂದೆ: ಬೆಳಗೆ ಕನ್ನಡಿಯೆನಿಸಿತ್ತಯ್ಯಾ! ಅರಿತರೆ ಶರಣ: ಮರೆತರೆ ಮಾನವ, ಮರೆಯದೆ ಪೂಜಿಸು ಕೂಡಲ ಸಂಗಯ್ಯನ.

—ಶಿವಶರಣರ ಅನುಭಾವದಿಂದ ಭವದ ಕೇಡು—

೪೯. ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ, ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ, ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ, ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ! ಕೂಡಲ ಸಂಗನ ಶರಣರ ಅನುಭಾವದಿಂದ ಎನ್ನ ಭವದ ಕೇಡು ನೋಡಯ್ಯ.

### —ಶರಣರ ನುಡಿಯೊಳಗೆ ಕೈಲಾಸವೇ ಅಡಗಿದೆ—

೫೦. ಕೆರೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಜೆ ಚಿಪ್ಪು ಕಾಣಬಹುದು; ವಾರಿಧಿ ಮೈದೆಗೆದರೆ ರತ್ನಂಗಳ ಕಾಣಬಹುದು. ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು.

### — ಶರಣ ಸಜ್ಜನರ ಸಂಗವ ಮಾಡು —

೫೧. ನಾರೆ, ಸಜ್ಜನರ ಸಂಗ ಲೇಸು ಕಂಡಯ್ಯಾ; ದೂರ, ದುರ್ಜನರ ಸಂಗ ಭಂಗವಯ್ಯಾ, ಸಂಗ ಎರಡುಂಟು: ಒಂದ ಬಿಡು, ಒಂದ ಹಿಡಿ; ಮಂಗಳ ಮೂರ್ತಿ ನಮ್ಮ ಕೂಡಲಸಂಗನ ಶರಣರ.

### —ಶರಣರ ಜ್ಞಾನಾಗ್ನಿಯಿಂದ ಅಜ್ಞಾನವೆಲ್ಲ ಅಳಿಯುವದು—

೫೨. ಮರ ಮರ ಮಥನದಿಂದ ಅಗ್ನಿ ಹುಟ್ಟಿ ಆ ಮರನೆಲ್ಲವ ಸುಡದಿಪ್ಪುದೇ? ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ, ಎನ್ನ ತನುಗುಣವನೆಲ್ಲವ ಸುಡದಿಪ್ಪುದೇ? ಇದು ಕಾರಣ ಮಹಾನುಭಾವರ ತೋರಿಸು ಕೂಡಲಸಂಗಮದೇವಾ.

### —ಶರಣರ ಸಂಗದಿಂದ ಸಕಲ ಪಾಪಕರ್ಮ ನಿರ್ಮೂಲವಾಗುವವು—

೫೩. ಆರಾರ ಸಂಗವೇನು ಮಾಡುವದಯ್ಯಾ? ಕೀಡಿ ಕುಂಡಲಿಗನಾಗದೇ ಅಯ್ಯಾ? ಚಂದನದ ಸನ್ನಿಧಿಯಲ್ಲಿ ಪರಿಮಳ ತಾಗಿ ಬೇವು, ಬೊಬ್ಬುಲಿ, ತರಿ ಗಂಧಂಗಳಾಗವೇ? ನಮ್ಮ ಕೂಡಲಸಂಗನ ಶರಣರ ಸಂಗದಿಂದ ಕರ್ಮ ನಿರ್ಮೂಳವಾಗದಿಹುದೇ ಅಯ್ಯಾ?

## ಮನದ ಕೊಳೆಯ ತೊಳೆವ

### —ಮಡಿವಾಳ ಕಾಯಕದಂತಿರುವ ಶರಣರ ಜ್ಞಾನ ಕಾಯಕ—

೫೪. ಗುರು ಉಪದೇಶ ಮಂತ್ರವೈದ್ಯ, ಜಂಗಮ ಉಪದೇಶ ಶಸ್ತ್ರವೈದ್ಯ, ಭವರೋಗವ ಕಳೆವ ಪರಿಯ ನೋಡಾ, ಕೂಡಲಸಂಗನ ಶರಣರ ಅನುಭಾವ ಮಡಿವಾಳನ ಕಾಯಕದಂತೆ.

### —ಮನದ ಕೊಳೆಯ ತೊಳೆದು ಶರಣರ ತೊಡಿಗೆಯ ಮಾಡಿ ಸಲಹು—

೫೫. ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ, ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ, ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣಿಯ

ಮಾಡಿ, ನಿಮ್ಮ ಶರಣರ ಪಾಪಕ್ಕೆ ಕೊಡಿಗೆಯ ಮಾಡಿ ಸಲಹು ಕೂಡಲ ಸಂಗಮದೇವಾ.

—ಶರಣರ ಮಹಿಮೆ ಸಂಸಾರಿಗರಿಗೆ ತಿಳಿಯದು—

೫೬. ಏತ ತಲೆವಾಗಿದರೇನು ಗುರುಭಕ್ತನಾಗಬಲ್ಲುದೇ? ಇಕ್ಕುಳ ಕೈಮುಗಿದರೇನು ಭೃತ್ಯಾಚಾರಿಯಾಗಬಲ್ಲುದೇ? ಗಿಳಿಯೋದಿದರೇನು ಲಿಂಗವೇದಿಯಾಗಬಲ್ಲುದೇ? ಕೂಡಲ ಸಂಗನ ಶರಣರು ಬಂದ ಬರವ, ನಿಂದ ನಿಲವ ಅಂಗಸಂಗಿಗಳೆತ್ತ ಬಲ್ಲರು.

—ಶರಣರ ಜ್ಞಾನವನ್ನು ಅರಿಯದವರು ಎಲ್ಲಿದ್ದರೇನು ?—

೫೭. ಬಚ್ಚಲ ನೀರು ತಿಳಿದಿದ್ದರೇನು ? ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು? ಆಕಾಶದ ಮಾವಿನ ಫಲವೆಂದರೇನು ? ಕೊಯ್ಯಲಿಲ್ಲ ಮೆಲಲಿಲ್ಲ, ಕೂಡಲ ಸಂಗನ ಶರಣರ ಅನುಭಾವವಿಲ್ಲದವರೆಲ್ಲಿದ್ದರೇನು? ಎಂತಾದರೇನು?

—ಶರಣರೊಡನೆ ಸರಸವಾಡದಿರು—

೫೮. ಹಾವಿನ ಹೆಡೆಯಕೊಂಡು ಕೆನ್ನೆಯ ತುರಿಸಿಕೊಂಡಂತೆ ಉರಿವ ಕೊಳ್ಳಿಯಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ. ಹುಲಿಯ ಮೀಸೆಯ ಹಿಡಿದುಕೊಂಡು ಒರೆದುಯ್ಯಾಲನಾಡುವಂತೆ; ಕೂಡಲ ಸಂಗನ ಶರಣರೊಡನೆ ಮರೆದು ಸರಸವಾಡಿದಡೆ, ಸುಣ್ಣದ ಕಲ್ಲ ಮಡಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

—ಶರಣರ ಕಂಡು ಉದಾಸೀನವ ಮಾಡದಿರು—

೫೯. ಕಲ್ಲ ನಾಗರ ಕಂಡರೆ ಹಾಲನೆರೆಯೆಂಬರು; ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ! ಉಂಬ ಜಂಗಮ ಬಂದರೆ ನಡೆಯೆಂಬರು; ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ ! ನಮ್ಮ ಕೂಡಲ ಸಂಗನ ಶರಣರ ಕಂಡು ಉದಾಸೀನವ ಮಾಡಿದರೆ ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ!

—ಶರಣರೊಡನೆ ಸರಸವಾಡಿದರೆ ನರಕ ತಪ್ಪದು—

೬೦. ಉರಿವ ಕೊಳ್ಳಿಯ ಮಂಡೆಯಲಿಕ್ಕಿದಡೆ ಉರಿವುದು ಮಾಬುದೇ ? ಕಲ್ಲ ಗುಗ್ಗರಿಯ ಮೆಲಿದರೆ ಹಲ್ಲು ಹೋಹುದು ಮಾಬುದೇ? ಶರಣರೊಡನೆ ಸರಸವಾಡಿದರೆ ನರಕ ತಪ್ಪದು ನೋಡಾ ಕೂಡಲ ಸಂಗಮದೇವಾ.

## —ಶಿವಶರಣರ ಪಾದವನ್ನೆ ನಂಬು—

೬೧. ಜಾತಿವಿಡಿದು ಸೂತಕವನರಸುವೆ, ಜ್ಯೋತಿವಿಡಿದು ಕತ್ತಲೆಯನರಸುವೆ. ಇದೇಕೋ ಮರುಳ ಮಾನವಾ. ಜಾತಿಯಲ್ಲಿ ಅಧಿಕನೆಂಬೆ ವಿಪ್ರಕೋಟಿಗಳಿದ್ದಲ್ಲಿ ಫಲವೇನು' 'ಭಕ್ತ ಶಿಖಾಮಣಿ' ಎಂಬುದು ವಚನ. ನಮ್ಮ ಕೂಡಲ ಸಂಗನ ಶರಣರ ಪಾದ ಪಿಡಿಷವ ನಂಬ, ಕೆಡಬೇಡ ಮಾನವಾ.

## —ಶರಣನು ಉಪಮಾತೀತನು—

೬೨. ಸತ್ತು ಹುಟ್ಟುವನಲ್ಲ, ಸಂದೇಹ ಸೂತಕಿಯಲ್ಲ.ನೋಡಯ್ಯಾ. ಕಾಯ ವಂಚಕನಲ್ಲ, ಜೀವವಂಚಕನಲ್ಲ, ನಿರಂತರ ಸಹಜ ನೋಡಯ್ಯಾ. ಶಂಕೆಯಿಲ್ಲದ ಮಹಿಮನು, ಕೂಡಲ ಸಂಗಮದೇವನ ಶರಣನು ಉಪಮಾತೀತನು ನೋಡಯ್ಯಾ.

## —ಶರಣನಿಗೆ ಕಠೋರ ಛಲವಿರಬೇಕು—

೬೩. ಛಲಬೇಕು ಶರಣಂಗೆ ಪರಧನವ ಒಲ್ಲೆನೆಂಬ, ಛಲಬೇಕು ಶರಣಂಗೆ ಪರಸತಿಯ ಒಲ್ಲೆನೆಂಬ, ಛಲಬೇಕು ಶರಣಂಗೆ ಪರದೈವವ ಒಲ್ಲೆನೆಂಬ, ಛಲಬೇಕು ಶರಣಂಗೆ ಲಿಂಗ ಜಂಗಮ ಒಂದೆಂಬ, ಛಲಬೇಕು ಶರಣಂಗೆ ಪರವಾದಿ ನಿಗ್ರಹದಲ್ಲಿ, ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ, ಛಲವಿಲ್ಲದವರ ಮೆಚ್ಚ ಕೂಡಲ ಸಂಗಮದೇವ

## —ಶರಣರಿಗೆ ಸಲ್ಲದ ಧನ ವ್ಯರ್ಥ—

೬೪. ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದು ನಾಯ ಹಾಲ ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲವಯ್ಯ. ಕೂಡಲ ಸಂಗನ ಶರಣರಿಗಲ್ಲದೆ ಮಾಡುವ ಅರ್ಥ ವ್ಯರ್ಥ ಕಂಡಯ್ಯಾ.

## —ಲಿಂಗನಿಷ್ಠೆಯ ಸಜ್ಜನರಿಗೆ ಶಿವ ಒಲಿಯುವನು—

೬೫. ಹಸಿದು ಮೆಕ್ಕೆಯ ಕಾಯಮೆಲಬಹುದೇ? ನೀರಡಿಸಿ ವಿಷವ ಕುಡಿಯಬಹುದೇ? ಸುಣ್ಣ ತಯ್ಯಲ ಬಣ್ಣ ಒಂದೆಂದರೆ ನಂಟುತನಕ್ಕೆ ಉಣ್ಣಬಹುದೇ? ಲಿಂಗ ಸಾರಾಯ ಸಜ್ಜನರಲ್ಲದವರ ಕೂಡಲ ಸಂಗಮದೇವನೆಂತೊಲಿವ?

## —ಶಿವಭಕ್ತರಲ್ಲದವರ ಸಹವಾಸ ಬೇಡ—

೬೬. ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ, ಆಕಳ ಹಾಲನೆರೆದು,

ಜೇನುತುಪ್ಪವ ಹೊಯ್ದರೆ ಸಿಹಿಯಾಗಬಲ್ಲುದೆ ಕಹಿಯಹುದಲ್ಲದೆ? ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು ಕೂಡಲ ಸಂಗಮದೇವಾ.

**—ತನು, ಮನ, ಧನವ ಕಾಡಿ ಬೇಡುವ ಶರಣರನ್ನು ತೋರಿಸು—**

**೬೭.** ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ, ಕುಂದಿದೆನಯ್ಯಾ ಎನ್ನ ನುಡಿಸುವರಿಲ್ಲದೆ. ಬಡವನಾದೆನಯ್ಯಾ ಎನ್ನ ತನು ಮನ ಧನವ ಬೇಡುವವರಿಲ್ಲದೆ. ಕಾಡುವ, ಬೇಡುವ ಶರಣರ ತಂದು ಕಾಡಿಸ, ಬೇಡಿಸು ಕೂಡಲ ಸಂಗಮದೇವಾ.

**—ಶರಣರ ಜ್ಞಾನಸುಧೆಯನ್ನು ಸವಿದವರು ಅಮರರು—**

**೬೮.** ಗುರಿ ತಾಗಿದ ಮೃಗವು ಒಂದಡಿಯನಿಡುವದೇ ಅಯ್ಯಾ, ತನುವ ತಾಗಿದ ಸುಖವು ಅಗಲುವದೇ ಅಯ್ಯಾ, ಕೂಡಲ ಸಂಗನ ಶರಣರ ಅನುಭಾವವುಂಡವರ ಮರಳಿ ಮರ್ತ್ಯರೆನಬಹುದೇ ?

**—ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆ ಮನ ಹರಿಯಗೊಡಬೇಡ—**

**೬೯.** ಅತ್ತಲಿತ್ತ ಹಾರದಂತೆ ಹೆಳವನ ಮಾಡಯ್ಯಾ ತಂದೆ, ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ, ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ, ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತಿರಿಸಯ್ಯಾ ಕೂಡಲ ಸಂಗಮದೇವಾ.

## ★ ಭಕ್ತಿಯೇ ಮುಕ್ತಿಯ ಪರಮ ಸಾಧನ ★

**—ನಾದ ವೇದಪ್ರಿಯನಲ್ಲದ ಭಕ್ತಿಪ್ರಿಯ ಶಿವ—**

**೭೦.** ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲವಯ್ಯಾ; ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲವಯ್ಯಾ; ನಾದವ ಮಾಡಿದ ರಾವಣಂಗೆ ಅರೆ ಆಯುಷ್ಯವಾಯಿತ್ತು, ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು! ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ; ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವ.

**—ತನು ಮನ ಧನಗಳಿಗೆ ಕಂಪನಗೊಳ್ಳದ ಶಿವನು ಭಕ್ತಿಕಂಪಿತನು—**

**೭೧.** ನಚ್ಚಿದೆನೆಂದರೆ ಮೆಚ್ಚಿದೆನೆಂದರೆ ಸಲೆ ಮಾರುವೋದೆನೆಂದರೆ, ತನುವ ನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು, ಇವಕ್ಕೆಲ್ಲ ಅಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲ ಸಂಗಮದೇವ!

## —ನಿಜವ ತಿಳಿಯದೇ ಮಾಡುವ ಭಕ್ತಿ ಬಹಿರಾಡಂಬರ—

೨೨. ಒಲವಿಲ್ಲದ ಪೂಜೆ, ಸ್ನೇಹವಿಲ್ಲದ ಮಾಟ, ಆ ಪೂಜೆಯು ಆ ಮಾಟವು ಚಿತ್ರದ ರೂಪು ಕಾಣಿರಣ್ಣಾ; ಚಿತ್ರದ ಕಬ್ಬು ಕಾಣಿರಣ್ಣಾ; ಅಪ್ಪಿದರೆ ಸುಖವಿಲ್ಲ, ಮೆಲಿದರೆ ಸವಿಯಿಲ್ಲ, ಕೂಡಲ ಸಂಗಮದೇವ ನಿಜವಿಲ್ಲದವನ ಭಕ್ತಿ.

## ಚಿತ್ತಶುದ್ಧಿ ಇಲ್ಲದವನ ಭಕ್ತಿ
## —ಹೆಂಡದ ಗಡಿಗೆಯ ಹೊರಗೆ ತೊಳೆದಂತೆ—

೨೩. ಗಂಡ. ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿ ಮಸಣಿಯ ಭಕ್ತೆ, ಗಂಡ ಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೆ ಮಾಂಸ, ಭಾಂಡ ಭಾಜನ ಶುದ್ಧಿಯಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ.

## —ಭಕ್ತಿ ಇಲ್ಲದ ಬಾಹ್ಯಾಡಂಭಿಕರನ್ನು ಶಿವನೊಲ್ಲನು—

೨೪. ಆಡಿದರೇನೊ? ಹಾಡಿದರೇನೊ ? ಓದಿದರೇನೊ ತ್ರಿವಿಧ ದಾಸೋಹ ವಿಲ್ಲದನ್ನಕ್ಕ ? ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ ? ಭಕ್ತಿ ಇಲ್ಲದವರನೊಲ್ಲ ಕೂಡಲ ಸಂಗಮದೇವ.

## —ಸತ್ಯಭಕ್ತಿಯ ಚಿನ್ನದ ಒಡವೆಯನ್ನು ತೊಡಿಸಿಕೊಳ್ಳುವ ಶಿವ—

೨೫. ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ತನು ಹಾಳಾಯಿತ್ತಯ್ಯಾ; ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಮನ ಹಾಳಾಯಿತ್ತಯ್ಯಾ; ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಕರ್ಮ ಛೇದನವಾಯಿತ್ತಯ್ಯಾ, ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿ ಎಂಬ ಒಡವೆಯನು ದಿಟವ ಮಾಡಿ ತೋರಿದ ಕಾರಣ ಅಲ್ಲಿ ಮಾಡುವರು ಮಾಡಿಸಿಕೊಂಬವರು ನೀವೇ ಕೂಡಲ ಸಂಗಮದೇವಾ.

## —ಶಿವಭಕ್ತನಾದ ಮೇಲೆ ಭಕ್ತಿಭಾವ ಬೆಳೆದು ಬಲಗೊಳ್ಳಬೇಕು—

೨೬. ಕಾಗೆ ಒಂದಗಳು ಕಂಡರೆ ಕರೆಯದೇ ತನ್ನ ಬಳಗವನೆಲ್ಲವನು ? ಕೋಳಿ ಒಂದು ಗುಟುಕ ಕಂಡರೆ ಕರೆಯದೆ ತನ್ನ ಕುಲವನೆಲ್ಲವನು ? ಶಿವ ಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಿಂತ ಕರಕಷ್ಟ ಕೂಡಲ ಸಂಗಮದೇವಾ.

—ಭಕ್ತಿ ಇಲ್ಲದ ಡಾಂಭಿಕ ಪೂಜೆ ಶಿವನಿಗೆ ಸಲ್ಲದು—

೭೭. ಗೀತವ ಹಾಡಿದರೇನು ? ಶಾಸ್ತ್ರ ಪುರಾಣಗಳ ಕೇಳಿದರೇನು ? ವೇದ ವೇದಾಂತವನೋದಿದರೇನು ? ಮನ ಒಲಿದು ಲಿಂಗ ಜಂಗಮ ಪೂಜಿಸಲರಿಯದವರು ಎಲ್ಲರಲ್ಲಿಯೂ ಅನುಭಾವಿಯಾದರೇನು ? ಭಕ್ತಿ ಇಲ್ಲದವರನೊಲ್ಲ ಕೂಡಲ ಸಂಗಮದೇವ.

## ★ ಗುರು ಲಿಂಗ ಜಂಗಮ ನಿಷ್ಠೆ ★

—ಶಿವಪಥ ತಿಳಿಯುವದಕ್ಕೆ ಗುರುಪಥವೇ ಮೂಲ ಸಾಧನ—

೭೮ ಮಡಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ ಹೊನ್ನೇ ಮೊದಲು, ಶಿವಪಥನರಿವಡೆ ಗುರುಪಥವೇ ಮೊದಲು, ಕೂಡಲ ಸಂಗಮದೇವರನರಿವುದಕ್ಕೆ ಶರಣರ ಸಂಗವೇ ಮೊದಲು.

—ಲಿಂಗದ ಮೇಲೆ ಭಕ್ತನ ಪರಮ ನಿಷ್ಠೆ ಬೇಕು—

೭೯. ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ ಇದ್ದರೇನೋ ಶಿವ ಶಿವಾ! ಹೋದರೇನೋ ಶಿವ ಶಿವಾ! ಕೂಡಲ ಸಂಗಮದೇವಯ್ಯಾ, ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ.

—ಜಂಗಮವ ಹರನೆಂದು ಕಂಡು ನರನೆಂದು ಭಾವಿಸಬೇಡ—

೮೦. ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದಡೆ ಮೇಲೆ ಪಲ್ಲವಿಸಿತ್ತು ನೋಡಾ. ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದರೆ ಮುಂದೆ ಸಕಲಾರ್ಥವ ನೀಡುವನು. ಆ ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದಡೆ ನರಕ ತಪ್ಪದು ಕಾಣಾ ಕೂಡಲ ಸಂಗಮದೇವಾ.

—ಜಂಗಮವೇ ಲಿಂಗವೆಂದು ನಂಬಿ ಸೇವೆಮಾಡು—

೮೧. ಕೃತಯುಗದಲ್ಲಿ ಕೇದಾರವೆಂಬ ಮುಖ್ಯಸ್ಥಾನ, ತ್ರೇತಾಯುಗದಲ್ಲಿ ವಾರಣಾಸಿ ಎಂಬ ಮೂಲಸ್ಥಾನ, ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ, ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ ಇಂತೀ ನಾಲ್ಕು ಮೂಲಸ್ಥಾನ! ನಾನಾ ಸ್ಥಾನವ ಮೆಟ್ಟದೆ ಜಂಗಮವೇ ಲಿಂಗವೆಂದು ನಂಬಿದೆ ಕೂಡಲ ಸಂಗಮದೇವಾ.

—ನಿತ್ಯ ನಿಯಮವ ಪಾಲಿಸದವರ ತೋರದಿರು—

೮೨. ಶ್ರೀವಿಭೂತಿಯ ಹೂಸದವರ, ಶ್ರೀರುದ್ರಾಕ್ಷಿಯ ಧರಿಸದವರ, ನಿತ್ಯ ಲಿಂಗಾರ್ಚನೆ ಮಾಡದವರ, ಜಂಗಮವೇ ಲಿಂಗವೆಂದರಿಯದವರ, ಸದ್ಭಕ್ತರ ಸಂಗವಲ್ಲಿರದವರ ತೋರದಿರು ಕೂಡಲ ಸಂಗಮದೇವಾ, ನಿರಗೊಡ್ಡಿ ಬೇಡುವೆನು.

—ಶರಣರ ಹಣೆಗೆ ವಿಭೂತಿಯೇ ಶೃಂಗಾರ—

೮೩. ನೀರಿಂಗೆ ನೈದಿಲೆಯೇ ಶೃಂಗಾರ, ಊರಿಂಗೆ ಆಗರವೇ ಶೃಂಗಾರ, ಸಮುದ್ರಕ್ಕೆ ತೆರೆಯೇ ಶೃಂಗಾರ, ನಾರಿಗೆ ಗುಣವೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ, ನಮ್ಮ ಕೂಡಲ ಸಂಗನ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ.

—ಸದ್ಭಕ್ತರ ಪಾದಸನ್ನಿಧಿಯು ಪರಮ ಪದವಿಯ ಕರುಣಿಸು—

೮೪. ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ. ನಾನು ಮತ್ತಾವ ಪದವಿಯನೊಲ್ಲೆನಯ್ಯ. ಕೂಡಲ ಸಂಗಮದೇವಾ, ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯನೇ ಕರುಣಿಸಯ್ಯ.

—ಪರಮ ಭಕ್ತನ ಸಹಜ ಶಿವಚಿಂತೆ—

೮೫. ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ಅಂಬುಜಕೆ ಭಾನುವಿನ ಉದಯದ ಚಿಂತೆ, ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ, ಎನಗೆ ನಮ್ಮ ಕೂಡಲ ಸಂಗಮದೇವರ ನೆನೆವುದೆ ಚಿಂತೆ.

—ಪರಚಿಂತೆ ಬಿಟ್ಟು ಪರಶಿವನ ಚಿಂತನೆ ಮಾಡು—

೮೬. ಪರಚಿಂತೆ ನಮಗೆ ಏಕೆ ಅಯ್ಯಾ? ನಮ್ಮ ಚಿಂತೆ ನಮಗೆ ಸಾಲದೇ? ಕೂಡಲ ಸಂಗಯ್ಯ ಒಲಿದಾನೋ ಇಲ್ಲವೋ ಎಂಬ ಚಿಂತೆ ಹಾಸಲುಂಟು, ಹೊದೆಯಲುಂಟು.

## ★ ಶ್ರೀ ಬಸವೇಶ್ವರನ ಬೆಡಗಿನ ವಚನಗಳು ★

—ಶಿವಕೃಪೆಯ ಅಗಾಧ ಘನತೆ—

೮೭. ಕರಿ ಘನ ಅಂಕುಶ ಕಿರಿದೆನ್ನಬಹುದೆ? ಬಾರದಯ್ಯಾ, ಗಿರಿ ಘನ ವಜ್ರ ಕಿರಿದೆನ್ನಬಹುದೆ? ಬಾರದಯ್ಯಾ, ಮರಹು ಘನ ನಿಮ್ಮ ನೆನಹು ಕಿರಿದೆನ್ನಬಹುದೆ? ಬಾರದಯ್ಯಾ, ಕೂಡಲ ಸಂಗಮದೇವಾ ನಿಮ್ಮ ಕೃಪೆಯ ಘನವ ನೀವೆ ಬಲ್ಲಿರಿ.

### —ಭಕ್ತಿ ಇಲ್ಲದ ಭಂಡಾಚಾರಿಗಳು ಶಿವಕೃಪೆಗೆ ಸಲ್ಲರು—

೮೮. ಒಡೆತ್ತ ಬಲ್ಲದು ಅವಲಕ್ಕಿಯ ಸವಿಯ ? ಕೋಡಗನೆತ್ತ ಬಲ್ಲದು ಸೆಳೆ ಮಂಚದ ಸುಖವ ? ಕಾಗೆ ನಂದನವನದೊಳಗಿದ್ದರೇನು ಕೋಗಿಲೆಯಾಗ ಬಲ್ಲದೆ? ಹೇಳಾ. ಕೊಳನ ತಡಿಯಲೊಂದು ಬಕ ಕುಳಿತಿದ್ದರೇನು ಕಳಹಂಸ ವಾಗಬಲ್ಲದೆ ? ಕೂಡಲ ಸಂಗಮದೇವಾ.

### —ಕೊಟ್ಟ ವಚನವ ಪಾಲಿಸುವವನೇ ಭಕ್ತ—

೮೯. ಮೊನೆ ತಪ್ಪಿದ ಬಳಿಕ ಅಲಗೇನ ಮಾಡುವದು ? ವಿಷ ತಪ್ಪಿದ ಬಳಿಕ ಹಾವೇನ ಮಾಡುವದು ? ಭಾಷೆ ತಪ್ಪಿದ ಬಳಿಕ ಬಲ್ಲಿದ ಭಕ್ತನೇನ ಮಾಡುವನಯ್ಯಾ ? ಭಾಷೆ ತಪ್ಪಿದ ಬಳಿಕ ಪ್ರಾಣವಾಶೆಯನು ಬಿಟ್ಟರೆ ಮೀಸಲನ್ನ ಸೊಣಗ ಮುಟ್ಟಿದಂತೆ ಕೂಡಲ ಸಂಗಮದೇವಾ.

### —ತೊರೆ ಇಳಿದರೆ ಅಂಬಿಗನಿಗೇನುಂಟು ?—

೯೦. ಸ್ನೇಹ ತಪ್ಪಿದ ಠಾವಿನಲ್ಲಿ ಗುಣವರಸುವರೇ ಅಯ್ಯಾ ? ಹೂವ ಬಾಡಿದಲ್ಲಿ ಪರಿಮಳವನರಸುವರೇ ಅಯ್ಯಾ? ಎನ್ನ ತಂದೆ ಕೂಡಲ ಸಂಗಮದೇವ, ತೊರೆ ಇಳಿದರೆ ಅಂಬಿಗಂಗೇನುಂಟು ?

### —ಸಂಸಾರ ಸರ್ಪದ ಸರಸ ಕ್ರೀಡೆ—

೯೧. ಹಲಬರ ನುಂಗಿದ ಹಾವಿಂಗೆ ತಲೆಬಾಲವಿಲ್ಲ ನೋಡು. ಕೊಲ್ಲುವದು ತ್ರಿಜಗವೆಲ್ಲವ, ತನಗೆ ಬೇರೆ ಪ್ರಳಯವಿಲ್ಲ. ನಾಲ್ಕಡಿಯನೈದುವದು ಲೋಕದ ಕಡೆಯನೆ ಕಾಂಬುದು. ಸೂಕ್ಷ್ಮಪಥದಲ್ಲಿ ನಡೆವುದು, ತನಗೆ ಬೇರೆ ಒಡಲಿಲ್ಲ. ಅಹಮೆಂಬ ಗಾರುಡಿಗನ ನುಂಗಿತ್ತು, ಕೂಡಲ ಸಂಗನ ಶರಣರಲ್ಲದುಳಿದವರ.

## ★ ಶ್ರೀ ಬಸವೇಶ್ವರ ಉದ್ಬೋಧಕ ಉಪದೇಶ ★

### —ಮರ್ತ್ಯಲೋಕವು ಕರ್ತಾರನ ಕಮ್ಮಟ—

೯೨ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ; ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ; ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲ ಸಂಗಮದೇವಾ.

### —ಆಚಾರವೇ ಸ್ವರ್ಗ, ಅನಾಚಾರವೇ ನರಕ—

೯೩. ದೇವಲೋಕ ಮರ್ತ್ಯಲೋಕವೆಂಬವು ಬೇರಿಲ್ಲ ಕಾಣಿರೋ, ಸತ್ಯವ ನುಡಿವುದೇ ದೇವಲೋಕ, ಅಸತ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಇವಕ್ಕೆ ನೀವೇ ಪ್ರಮಾಣ ಕೂಡಲ ಸಂಗಮ ದೇವಾ.

### —ದಯವೇ ಧರ್ಮದ ಮೂಲ—

೯೪. ದಯವಿಲ್ಲದ ಧರ್ಮವದಾವುದಯ್ಯಾ ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ, ದಯವೇ ಧರ್ಮದ ಮೂಲವಯ್ಯಾ, ಕೂಡಲ ಸಂಗಮದೇವ ನಂತಲ್ಲದೊಲ್ಲನಯ್ಯಾ.

### —'ಅಯ್ಯಾ' ಎಂದಡೆ ಸ್ವರ್ಗ, 'ಎಲವೋ' ಎಂದಡೆ ನರಕ—

೯೫. ಪುಣ್ಯ ಪಾಪಂಗಳೆಂಬವು ತಮ್ಮ ಇಷ್ಟ ಕಂಡಿರಯ್ಯಾ! "ಅಯ್ಯಾ" ಎಂದಡೆ ಸ್ವರ್ಗ; ಎಲವೋ ಎಂದಡೆ ನರಕ. "ದೇವ, ಭಕ್ತ, ಜಯ ಜೀಯ" ಎಂಬ ನುಡಿಯೊಳಗೆ ಕೈಲಾಸವೈದುದು ಕೂಡಲ ಸಂಗಮದೇವಾ

### —ಮರ, ನೀರನ್ನು ನಂಬುವ ಜನರು ಶಿವನನ್ನು ಅರಿಯರು—

೯೬. ನೀರ ಕಂಡಲ್ಲಿ ಮುಳುಗುವರಯ್ಯಾ, ಮರ ಕಂಡಲ್ಲಿ ಸುತ್ತುವರಯ್ಯಾ, ಬತ್ತುವ ಜಲವ, ಒಣಗುವ ಮರನ ಮೆಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲ ಸಂಗಮದೇವಾ.

### —ಮೃದು ವಚನಗಳೇ ಸಕಲ ಜಪ ತಪಗಳು—

೯೭. ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ, ಮೃದುವಚನವೇ ಸಕಲ ಜಪಂಗಳಯ್ಯಾ, ಮೃದುವಚನವೇ ಸಕಲ ತಪಂಗಳಯ್ಯಾ, ಸದುವಿನಯವೇ ಸದಾಶಿವನ ಒಲುಮೆಯಯ್ಯಾ, ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ

### —ನಡೆ ನುಡಿ ಒಂದಾದ ಸುವಿಚಾರ ಸಜ್ಜನನಾಗು—

೯೮. ಆಚಾರವನರಿಯಿರಿ; ವಿಚಾರವನರಿಯಿರಿ, ಜಂಗಮಸ್ಥಲ ಲಿಂಗ ಕಾಣಿರಯ್ಯ. ಜಾತಿ ಭೇದವಿಲ್ಲ, ಸೂತಕವಿಲ್ಲ, ಅಜಾತಂಗೆ ಕುಲವಿಲ್ಲ. ನುಡಿದಂತೆ ನಡೆಯದಿದ್ದರೆ ಕೂಡಲ ಸಂಗಯ್ಯ ಮೆಚ್ಚ ಕಾಣಿರಯ್ಯಾ.

# ★ ಶ್ರೀ ಬಸವೇಶ್ವರ ಅಮರ ವಚನ ವಾಣಿ ★

## ● ನೀತಿಬೋಧಕ ವಚನಗಳು ●

### —ಅಂತರಂಗ, ಬಹಿರಂಗ ಶುದ್ಧಿಯ ಸರಳ ವಿವರಣೆ—

೯೯. ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ; ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ. ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ; ಇದೇ ನಮ್ಮ ಕೂಡಲ ಸಂಗಮದೇವನೊಲಿಸುವ ಪರಿ!

### —ಮಾನವನೇ, ಕೋಪಾಗ್ನಿಗೆ ಗುರಿಯಾಗದಿರು—

೧೦೦. ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ? ತನಗಾದ ಆಗೇನು? ಅವರಿಗಾದ ಚೇಗೆಯೇನು? ತನುವಿನ ಕೋಪ ತನ್ನ ಹಿರಿಯತನದ ಕೇಡು! ಮನದ ಕೋಪ ತನ್ನ ಅರಿವಿನ ಕೇಡು! ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು, ಕೂಡಲ ಸಂಗಮದೇವಾ!

### —ಪರಸ್ತ್ರೀ, ಪರಧನ ತೊರೆಯದೇ ಮಾಡುವ ತೀರ್ಥಸ್ನಾನ ವ್ಯರ್ಥ—

೧೦೧. ತೊರೆಯ ಮೀವಣ್ಣಗಳಿರಾ, ತೊರೆಯಿರೊ ಪರಧನವ! ಪರದ್ರವ್ಯವ ಬಿಡದೆ ಹೋಗಿ ತೊರೆಯಲ್ಲಿ ಮಿಂದರೆ, ಆ ತೊರೆಯಲ್ಲಾ ಬರುವೋರೆ ಕಂಡಯ್ಯಾ! ಕಳವ ತೊರೆದು ಮಿಂದರೆ ಒಲಿದು ಕೂಡಿಕೊಂಬ ನಮ್ಮ ಕೂಡಲ ಸಂಗಮದೇವ.

### —ನುಡಿದಂತೆ ನಡೆಯದಿದ್ದರೆ ಶಿವ ಮೆಚ್ಚನು—

೧೦೨. ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು, ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು, ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲ ಸಂಗಮದೇವನೆಂತೊಲಿವನಯ್ಯಾ?

### —ಪರಸ್ತ್ರೀ ಪರಧನಗಳಿಗೆ ಪರವಶನಾಗಬೇಡ—

೧೦೩. ಹರಿವ ಹಾವಿಗಂಜೆ, ಉರಿಯ ನಾಲಿಗೆಗಂಜೆ, ಸುರಿಗೆಯ ಮೊನೆಗಂಜೆ ಒಂದಕ್ಕಂಜುವೆ, ಒಂದಕ್ಕಳುಕುವೆ. ಪರಸ್ತ್ರೀ ಪರಧನವೆಂಬ ಜೂಜಿಗಂಜುವೆ. ಮುನ್ನಂಜದ ರಾವಣನೇ ವಿಧಿಗೊಳಗಾದ! ಅಂಜುವೆನಯ್ಯಾ, ಕೂಡಲ ಸಂಗಮದೇವಾ.

—ಸಿರಿವಂತಿಕೆಯ ಸೊಕ್ಕಿನಲ್ಲಿ ಶಿವನನ್ನು ಮರೆಯದಿರು—

೧೦೪. ಹಾವ ತಿಂದವರ ನುಡಿಸಬಹುದು, ಗರ ಹೊಡೆದವರ ನುಡಿಸಬಹುದು, ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ, ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರಯ್ಯಾ ಕೂಡಲಸಂಗಮದೇವಾ.

—ಕುಲ ಜಾತಿಗಳೆಲ್ಲ ಮಾನವ ಕಲ್ಪಿತ—

೧೦೫. ಕೊಲ್ಲುವವನೇ ಮಾದಿಗನು, ಹೊಲಸು ತಿಂಬುವನೇ ಹೊಲೆಯ ಕುಲವೇನೋ? ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರಿಲ್ಲ ಕುಲಜರು.

—ಲೋಕದ ಡೊಂಕ ನೀವೇಕೆ ತಿದ್ದುವಿರಿ ?—

೧೦೬. ಲೋಕದ ಡೊಂಕ ನೀವೇಕೆ ತಿದ್ದುವಿರಿ ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ.. ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ, ಕೂಡಲ ಸಂಗಮದೇವ.

—ಅಂತರಂಗ ಶುದ್ಧವಿಲ್ಲದವರ ಸಂಗ ಕಾಳಕೂಟ ವಿಷ—

೧೦೭. ನಾರ ಸಜ್ಜನರ ಮಾಡುವದು, ದೂರ ದುರ್ಜನರ ಸಂಗ ಬೇಡವಯ್ಯಾ. ಆವ ಹಾವಾದರೇನು ವಿಷ ಒಂದೇ. ಅಂತವರ ಸಂಗ ಬೇಡವಯ್ಯಾ. ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿ, ಕಾಳಕೂಟ ವಿಷವು ಕೂಡಲ ಸಂಗಮದೇವಾ.

—ಅಂತರಂಗ ಶುದ್ಧಿಯಿಂದಲೇ ಆತ್ಮಸಾಕ್ಷಾತ್ಕಾರ—

೧೦೮. ಹುತ್ತವ ಬಡಿವರೆ ಹಾವು ಸಾಯಬಲ್ಲದೇ ಅಯ್ಯಾ? ಘೋರ ತಪವ ಮಾಡಿದರೇನು? ಅಂತರಂಗ ಆತ್ಮಶುದ್ಧವಿಲ್ಲದವರನೆಂತು ನಂಬುವನಯ್ಯಾ ಕೂಡಲ ಸಂಗಮದೇವಾ.

---



## — ಕಠಿಣ ಶಬ್ದಗಳ ಸರಳ ಅರ್ಥ —

ಅಘ—[illegible]

ಅನುಭಾವ—ಆತ್ಮಜ್ಞಾನ,

ಅರಸು-ಶೋಧಿಸು.

ಅಲಗು—ಹದನವಾದ ಕತ್ತಿ

ಅವಸರ—ಪ್ರಸಂಗ, ವೇಳೆ.

ಅಳುಕು—ಅಂಜು, ಹಿಂಜರಿ

ಅಂಬುಜ—ಕಮಲ

ಅಂಬುಧಿ—ಸಮುದ್ರ

ಅಂಧ-ಕುರುಡ

ಆದ್ಯರು—ಮೊದಲಿಗರು, ಪುರಾತನರು

ಇಂಬಿಟ್ಟುಕೊಳ್ಳು—ಆಶ್ರಯಕೊಡು

ಉದಕ—ನೀರು

ಒಡಲು—ಶರೀರ, ಹೊಟ್ಟೆ

ಓಡು-ಹರಿವಾಣ

ಕಮ್ಮಟ—ಆವಿಗೆ.

ಕರಕಷ್ಟ—ಅತಿಕಷ್ಟದಾಯಕ

ಕಡವರ—ಬಂಗಾರ

ಕುಂಜರ—ಆನೆ.

ಕುಂಡಲಿಗ-ಮೈಗೆಮಣ್ಣು ಹತ್ತದಂತೆ ಇರುವ ಹುಳ

ಕೋಡಗ—ಮಂಗ

ಕೆಯ್ಯ-ಹೊಲ

ಕೊನರು—ಚಿಗುರು, ಎಲೆ ಒಡೆ

ಗರ—ಭೂತ, ಪಿಶಾಚಿ

ಗಗನ—ಆಕಾಶ

ಗಾರುಡ—ಇಂದ್ರಜಾಲ, ಮಾಟ

ಚಕ್ಷು—ನೇತ್ರ, ಕಣ್ಣು

ಚಕೋರ—ಬೆಳದಿಂಗಳಲ್ಲಿ ನಲಿಯುವ ಪಕ್ಷಿ

ಚಂದನ-ಶ್ರೀಗಂಧ

ಛಲ—ಹಟ, ನಿರ್ಧಾರ, ನಿಶ್ಚಯ

ತಮಂಧ—ಕತ್ತಲೆ

ತವರಾಜ—ಒಂದು ಬಗೆಯ ಸಕ್ಕರೆ

ತುಯ್ಯಲ--ಬೆಣ್ಣೆ

ತೊರೆ—ತ್ಯಜಿಸು, ಬಿಡು, ಪ್ರವಾಹ

ದರ್ಪಣ—ಕನ್ನಡಿ

ದುರಿತ—ಪಾಪ

ದಂಡಿಗೆ--ತಂಬೂರಿಯ ಕೋಲು

ಧೃತಿಗೆಡು-ಧೈರ್ಯಗೆಡು

ನನೆ—ಮೊಗ್ಗು

ನೇಹ—ಸ್ನೇಹ, ಪ್ರೀತಿ

ನೊಸಲು--ಹಣೆ

ಮಡಿಕೆ--ಗಡಿಗೆ

ಮರ್ತ್ಯ--ಮೃತ್ಯುಲೋಕ

ಮಲೆ--ಪರ್ವತ

ಮಾಣಿಸು--ಬಿಡಿಸು, ಕಳೆ

ಮಾರುಹೋಗು--ವಶನಾಗು

ಮರೀಚಿ--ಮೃಗಜಲ

ಮೆಲಲು—ತಿನ್ನಲು

ಮೇರು-ಬಂಗಾರದ ಪರ್ವತ

ವಾರಿಕಲ್ಲು--ಆಣೆಕಲ್ಲು

ವಾರಿಧಿ--ಸಮುದ್ರ

ವ್ಯಾಧ--ಬೇಡ

ವಿಕಳ--ವ್ಯಾಕುಲ, ವಿಹ್ವಲ

ವಿಗರ್ಭಣೆ--ನಿಂದೆ

ಸೂತಕ—ದೋಷ, ಮಲ

ಸೊಡರು--ದೀಪ

ಸೊಣಗ--ನಾಯಿ, ಶುನಕ

ಸೋರೆ--ಕುಂಬಳಕಾಯಿ

ಹಡಕಿ--ಹೊಲಸು

ಹಳಿ--ನಿಂದಿಸು

ಹೆಳವ-ಕುಂಟ

# ಆರು ಆಣೆ ಬೆಲೆಯ ಪುಸ್ತಕಗಳು



೩೧ ಶ್ರೀ ಕ್ಷೇತ್ರ ಉಳವಿ ಮಹಾತ್ಮೆ
೩೨ ಶ್ರೀ ಕ್ಷೇತ್ರ ಗೋಕರ್ಣ ಮಹಾತ್ಮೆ
೩೩ ಮುಹೂರ್ತ ದರ್ಪಣ
೩೪ ಶಿವರಾತ್ರಿ ಮಹಿಮೆ
೩೫ ಭಗವದ್ಗೀತಾ
೩೬ ಶನಿದೇವರ ಮಹಾತ್ಮೆ
೩೭ ಪ್ರಶ್ನ ಚಿಂತಾಮಣಿ
೩೮ ವರ್ಷ ಭವಿಷ್ಯ
೩೯ ವೆಂಕಟೇಶ ಮಹಾತ್ಮೆ
೪೦ ರೇಣುಕಾ ಮಹಾತ್ಮೆ
೪೧ ಹರಿಭಕ್ತರ ಕಥೆಗಳು
೪೨ ಭಾರತದ ಕರ್ಮಯೋಗಿಗಳು
೪೩ ಸರ್ವಜ್ಞ ವಚನ
೪೪ ಅಕ್ಕಮಹಾದೇವಿ ವಚನ
೪೫ ಬಸವೇಶ್ವರ ವಚನ
೪೬ ಹದಿನಾರು ಸೋಮವಾರ ವ್ರತಕಥೆ

**ಕಾಮಶಾಸ್ತ್ರದ ಪುಸ್ತಕಗಳು**

೪೭ ಸುಖ ಸಂಸಾರ
೪೮ ಪುತ್ರ ಸಂತಾನ
೪೯ ದಾಂಪತ್ಯ ಪ್ರೇಮ
೫೦ ಕೋಕ ಶಾಸ್ತ್ರ
೫೧ ರತಿ ವಿಲಾಸ
೫೨ ಏಕಾಂತ ಸುಖ
೫೩ ನಿದ್ರಾ ವಿಲಾಸ
೫೪ ಕಾಮ ಶಾಸ್ತ್ರದ ಗುಟ್ಟು
೫೫ ಪೌರುಷ ಸಾಧನೆ
೫೬ ಸಖ ಪ್ರಸೂತಿ
೫೭ ಬ್ರಹ್ಮಚರ್ಯ
೫೮ ಕಾಮ ರತಿ
೫೯ ಪ್ರಥಮ ರಾತ್ರಿ
೬೦ ಆಸನಗಳು




ಮಲ್ಲಿಕಾರ್ಜುನ ಮುದ್ರಣಾಲಯ.
ದುರ್ಗದ-ಬೈಲ, ಹುಬ್ಬಳ್ಳಿ.